# ಶಿಕ್ಷಕ ಶಿಕ್ಷಕರನ್ನು ಸಬಲೀಕರಿಸುವುದು

–ಮೈಥಿಲಿ ರಾಮಚಂದ್

ಈ ಲೇಖನದಲ್ಲಿ ನಾನು ಸೇವಾಪೂರ್ವ ಪ್ರಾಥಮಿಕ ಶಿಕ್ಷಕ ಶಿಕ್ಷಣ ಕ್ಷೇತ್ರದೊಡನೆ ಕೆಲಸ ಮಾಡಿದ ಅನುಭವಗಳನ್ನು[1] (ಇದು ಡಿಪ್ಲೊಮಾ ಇನ್ ಎಜುಕೇಶನ್– D.El.Edಯನ್ನು ನೀಡುತ್ತದೆ)ಹಂಚಿಕೊಳ್ಳುತ್ತಿದ್ದೇನೆ. ಅದು 2012–13ರಲ್ಲಿ SCERT ಕರ್ನಾಟಕವು ಕೈಗೊಂಡ D.El.Ed ಕಾರ್ಯಕ್ರಮದ ಪಠ್ಯಕ್ರಮ ಪರಿಷ್ಕರಣೆಯ ಸಂದರ್ಭ. ಈ ಲೇಖನವು ಶಿಕ್ಷಕ ಶಿಕ್ಷಕರ ಸಿದ್ಧತೆ ಹಾಗೂ ಆಚರಣೆಗಳನ್ನು ಒಂದು ಸಮಸ್ಯೆ ಎಂದು ಪರಿಗಣಿಸುತ್ತದೆ.

ನಮ್ಮ ದೇಶದಲ್ಲಿ ಶಿಕ್ಷಕ ಶಿಕ್ಷಣವು ಸದ್ಯಕ್ಕೆ ಪಲ್ಲಟದ ಸ್ಥಿತಿಯಲ್ಲಿದೆ. ಎಲ್ಲೆಡೆಯೂ ಶಿಕ್ಷಕರ ನಿರೀಕ್ಷೆಗಳು ಹೆಚ್ಚುತ್ತಿವೆ. ಅದೇ ವೇಳೆಗೆ, ನ್ಯಾಯ ಸಮತೆಯ ಸಮಸ್ಯೆಗಳು ಹಾಗೆಯೇ ಉಳಿದಿವೆ ಮತ್ತು ಹಲವಾರು ಶಾಲೆಗಳಲ್ಲಿ ಅದು ಉಲ್ಬಣಗೊಂಡಿದೆ. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005, ಶಿಕ್ಷಣ ಹಕ್ಕು ಕಾಯಿದೆ 2009(National Curriculum Framework 2005, RtE Act 2009) ಹಾಗೂ ಜಸ್ಟೀಸ್ ವರ್ಮಾ ಸಮಿತಿ ವರದಿ 2012 ಗಳ ಆಧಾರದ ಮೇಲೆ ಶಿಕ್ಷಕ ಶಿಕ್ಷಣದ ವ್ಯವಸ್ಥೆಗೆ ಸಂಬಂಧಿಸಿದಂತೆ ಬದಲಾವಣೆಗಳನ್ನು ಮಾಡಲಾಗುತ್ತಿದೆ. ಶಿಕ್ಷಕರು ಪರಿಷ್ಕೃತ ಶಾಲಾ ಪಠ್ಯಕ್ರಮಗಳು ಒಡ್ಡುವ ಅರಿವಿನ ಅಗತ್ಯಗಳನ್ನು ಪೂರೈಸಲು ಹಾಗೂ ಹೊಸ ಕಾಯಿದೆಗಳು ಕಡ್ಡಾಯಗೊಳಿಸಿರುವ ಒಳಗೊಳ್ಳುವಿಕೆಯ ತರಗತಿ ಕೋಣೆಗಳ ಅಗತ್ಯಗಳನ್ನು ಪೂರ್ಣಗೊಳಿಸಲು ಬೇಕಾಗಿರುವ ಹೇಳಿಕೆ ಮತ್ತು ಕೌಶಲ್ಯಗಳನ್ನು ಪಡೆದುಕೊಳ್ಳುವ ನಿಟ್ಟಿನಲ್ಲಿ ಅದಕ್ಕನುಗುಣವಾಗಿ ದೇಶದುದ್ದಗಲಕ್ಕೂ ಶಿಕ್ಷಕ ಶಿಕ್ಷಣ ಕಾರ್ಯಕ್ರಮಗಳನ್ನು ಮರುವಿನ್ಯಾಸಗೊಳಿಸಲಾಗುತ್ತಿದೆ. ಇಂತಹ ಕಾರ್ಯಕ್ರಮಗಳನ್ನು ಪ್ರಮುಖವಾಗಿ ಶಿಕ್ಷಕ ಶಿಕ್ಷಕರು ಜಾರಿಗೊಳಿಸುತ್ತಾರೆ.

ಶಿಕ್ಷಕ ಶಿಕ್ಷಣಕ್ಕಾಗಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (National Curriculum Framework for Teacher Education -NCFTE, 2009) ಶಿಕ್ಷಕ ಶಿಕ್ಷಣ ಕಾರ್ಯಕ್ರಮಗಳ ಪಠ್ಯಕ್ರಮ ಪರಿಷ್ಕರಣೆಗೆ ಸಂಬಂಧಿಸಿದಂತೆ ಸೇವಾಪೂರ್ವ ಹಾಗೂ ಸೇವಾನಿರತ ಕ್ಷೇತ್ರಗಳೆರಡರಲ್ಲಿಯೂ ಮಾರ್ಗದರ್ಶನವನ್ನು ಒದಗಿಸುತ್ತದೆ. ಇದು ಪರ್ಯಾಲೋಚನೆಯ ವಿಧಾನವನ್ನು ಶಿಕ್ಷಕ ಶಿಕ್ಷಣದ ಕೇಂದ್ರ ತತ್ತ್ವವನ್ನಾಗಿ ನಿಗದಿಪಡಿಸಿದೆ. ಪರ್ಯಾಲೋಚನೆಯ ವಿಧಾನದಲ್ಲಿ 'ಪಡೆದುಕೊಂಡ' ಜ್ಞಾನದೆಡೆಗೆ ವಿಮರ್ಶಾತ್ಮಕ ನೋಟವೊಂದನ್ನು ಹೊಂದಬೇಕಾಗಿರುತ್ತದೆ ಹಾಗೂ ಜ್ಞಾನ ಮತ್ತು ಆಚರಣೆಗಳು ನಿರಂತರವಾಗಿ ಪರೀಕ್ಷೆಗೊಳಪಡಬೇಕಾದ ಸಿದ್ಧಾಂತಗಳಾಗಿವೆ ಎಂಬ ನಿಲುವನ್ನು ತಳೆದಿರಬೇಕಾಗುತ್ತದೆ (Sockett, 2008). ಸದ್ಯಕ್ಕೆ ಶಿಕ್ಷಕ ಶಿಕ್ಷಕರು ಹಾಗೆ ಮಾಡುವ ಸಾಮರ್ಥ್ಯವನ್ನು ಪಡೆದಿಲ್ಲ. ಅವರು ಜ್ಞಾನವನ್ನು 'ಕೊಟ್ಟಿದ್ದು' ಎಂಬುದಾಗಿ ಪರಿಗಣಿಸುತ್ತಾರೆ ಹಾಗೂ ಆಚರಣೆಗಳನ್ನು ಮುಖ್ಯವಾಗಿ ಉಪನ್ಯಾಸಗಳ ಮೂಲಕ ನೀಡಲಾದ ಸ್ಥಿರ 'ವಿಧಾನಗಳು' ಎಂದು ನೋಡುತ್ತಾರೆ (ಮೈಥಿಲಿ, 2011). ಇದಕ್ಕೆ ಮುಖ್ಯ ಕಾರಣ, ಶಿಕ್ಷಕ ಶಿಕ್ಷಕರು ಇರುವ ಜ್ಞಾನದ ನಿಬಂಧನೆಗಳನ್ನು ವಿಮರ್ಶಿಸುವ ಸಾಮರ್ಥ್ಯವುಳ್ಳ ವಿದ್ವಾಂಸರಾಗಿ ಕಾರ್ಯ ನಿರ್ವಹಿಸಲು ಅಗತ್ಯವಿದ್ದ ಜ್ಞಾನ, ಕೌಶಲ್ಯ ಹಾಗೂ ಹೇಳಿಕೆಗಳನ್ನು ತಮ್ಮ ವೃತ್ತಿಯ ಆರಂಭದಲ್ಲಿ ಪಡೆದುಕೊಳ್ಳಲಿಲ್ಲ. NCFTE ಯು "ಶಿಕ್ಷಕ ಶಿಕ್ಷಣದ ಅತ್ಯಂತ ದುರ್ಬಲ ಅಂಶವೆಂದರೆ, ಶಿಕ್ಷಕ ಶಿಕ್ಷಕರ ವೃತ್ತಿಪರ ಸಿದ್ಧತೆಯ ಕೊರತೆ" ಎಂಬುದನ್ನು ಕೂಡ ಎತ್ತಿಹೇಳುತ್ತದೆ (NCTE, 2009; **ಪು.ಸಂ.**15) ಶಿಕ್ಷಕ ಶಿಕ್ಷಕರಿಗೆ ಕಡ್ಡಾಯಗೊಳಿಸಲಾದ ವೃತ್ತಿಪರ ಅರ್ಹತೆಯೆಂದರೆ M.Ed. ಇಲ್ಲಿಯವರೆಗೂ ಕಾರ್ಯಕ್ರಮವು ಅಷ್ಟೊಂದು ಸ್ಪಂದನಶೀಲವಾಗಿರಲಿಲ್ಲ ಹಾಗೂ ತಮ್ಮ ವೃತ್ತಿಯ ಬೇಡಿಕೆಗಳನ್ನು ಈಡೇರಿಸಲು ಶಿಕ್ಷಕ ಶಿಕ್ಷಕರನ್ನು ಸಾಕಷ್ಟು ರೀತಿಯಲ್ಲಿ ಸಿದ್ಧಗೊಳಿಸಲು ಅದು ವಿಫಲವಾಗಿತ್ತು (NCTE, 2009). ಸಬಲವಾದ ಜ್ಞಾನದ ತಳಹದಿಯನ್ನು ಕಟ್ಟಲು ಆ ನಂತರದ ವೃತ್ತಿಪರ ಅಭಿವೃದ್ಧಿಗೆ ಶಿಕ್ಷಕ ಶಿಕ್ಷಕರಿಗಿರುವ ಅವಕಾಶಗಳು ತುಂಬಾ ಸೀಮಿತ (ibid). ಕರ್ನಾಟಕದಲ್ಲಿ ಕೈಗೊಳ್ಳಲಾದ ಅಧ್ಯಯನವೊಂದರ[2] ಪ್ರಕಾರ, ಪ್ರಾಥಮಿಕ ಶಿಕ್ಷಕ ಶಿಕ್ಷಣ ಸಂಸ್ಥೆಗಳಲ್ಲಿರುವ ಬಹುಪಾಲು ಶಿಕ್ಷಕ ಶಿಕ್ಷಕರು ತಾವು ಯಾವುದೇ ಸೇವಾನಿರತ ಕಾರ್ಯಕ್ರಮಗಳಲ್ಲಿ ಭಾಗವಹಿಸಿಲ್ಲ ಎಂಬುದಾಗಿ ಹೇಳಿದರು (ಮೈಥಿಲಿ, 2011).

ಆದ್ದರಿಂದ, ಕರ್ನಾಟಕ ಸರ್ಕಾರವು 2012 ರಲ್ಲಿ D.Ed ಕಾರ್ಯಕ್ರಮದ ಪಠ್ಯಕ್ರಮ ಪರಿಷ್ಕರಣೆಯನ್ನು ಕೈಗೆತ್ತಿಕೊಂಡಾಗ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯು (DSERT) ಶಿಕ್ಷಕ ಶಿಕ್ಷಕರನ್ನು ಸಬಲೀಕರಿಸಲು ಹಲವಾರು ಕ್ರಮಗಳನ್ನು ಕೈಗೆತ್ತಿಕೊಂಡಿತು. ಪಠ್ಯಕ್ರಮ ಪರಿಷ್ಕರಣೆಯ ಪ್ರಕ್ರಿಯೆಯನ್ನು ಕುರಿತು ಅವರಲ್ಲಿ ಕೆಲವರೊಡನೆ ಸಮಾಲೋಚಿಸುವುದರ ಜೊತೆಗೆ ಪರಿಷ್ಕೃತ ಪಠ್ಯಕ್ರಮವನ್ನು ಕಾರ್ಯಗತಗೊಳಿಸಲು ಅನುಕೂಲವಾಗುವಂತೆ ಸಂಬಂಧಪಟ್ಟ ಕಾರ್ಯಕ್ಷೇತ್ರ ತಜ್ಞರಿಂದ ನಿರ್ಮಿಸಲ್ಪಟ್ಟ ವೀಡಿಯೋ ಮುದ್ರಿಕೆಗಳ ಜೊತೆಗೆ ಕೈಪಿಡಿ ಮತ್ತು ಸೂಚನಾ ಪುಸ್ತಿಕೆಗಳ ರೂಪದಲ್ಲಿ ಪಠ್ಯಕ್ರಮ ಬೆಂಬಲ ಸಾಮಗ್ರಿಗಳನ್ನು ಪ್ರಕಟಿಸಲಾಯಿತು. ಪರಸ್ಪರ ಎದುರು ಬದುರಾಗಿ ಹಾಗೂ ದೂರಸಮಾವೇಶ (ಟೆಲಿಕಾನ್ಫರನ್ಸ್) ಮೂಲಕ ಹೀಗೆ ಎರಡೂ ರೀತಿಯಲ್ಲಿ ಪರಿಚಯಾತ್ಮಕ ಕಾರ್ಯಕ್ರಮಗಳನ್ನು ನಡೆಸಲಾಯಿತು.

ಪ್ರಾಥಮಿಕ ಶಿಕ್ಷಕ ಶಿಕ್ಷಣ ಸಂಸ್ಥೆಗಳ ನೂರಕ್ಕೂ ಹೆಚ್ಚು ತರಗತಿಕೋಣೆಗಳಲ್ಲಿ ಗಮನಿಸಿದಾಗ ಉಪನ್ಯಾಸವೊಂದೇ (ಬೋಧನೆಯೊಂದೇ) ವ್ಯವಹರಿಸುವ ವಿಧಾನವಾಗಿರುವುದು ಕಂಡುಬಂದಿತು (ಮೈಥಿಲಿ, 2011). ಶಿಕ್ಷಕ ಶಿಕ್ಷಕರು ಹೇಳುವುದರ ಹೊರತಾಗಿ (ಬೋಧಿಸುವುದರಿಂದಾಚೆಗೆ) ಮತ್ತೇನನ್ನಾದರೂ ಬಳಸುವಂತೆ ಹಾಗೂ ಪ್ರಾಥಮಿಕ ಶಾಲಾ ಶಿಕ್ಷಕರು ಅಳವಡಿಸಿಕೊಳ್ಳಬೇಕೆಂದು ಅಪೇಕ್ಷಿಸಲಾದ ಮಾದರಿ ಆಚರಣೆಗಳನ್ನು ರೂಪಿಸುವುದಕ್ಕಾಗಿ ಪಠ್ಯಕ್ರಮ ರಚನಾ ಸಮಿತಿಯ ಸದಸ್ಯರು ಶಿಕ್ಷಕ ಶಿಕ್ಷಕರ ಕೈಪಿಡಿಯೊಂದನ್ನು ಸಿದ್ಧಪಡಿಸಿದರು.[3] ಪ್ರತಿಯೊಂದು ಕೋರ್ಸ್‌ಗೂ ಸಂಭಾವ್ಯ ಸಂಪನ್ಮೂಲಗಳು ಹಾಗೂ ಮೌಲ್ಯಮಾಪನ ಕಾರ್ಯತಂತ್ರಗಳ ಜೊತೆಗೆ ಪ್ರತೀ ಘಟಕಕ್ಕೂ ಹಲವಾರು ಸೂಚಿತ ಕಾರ್ಯಗಳನ್ನು ಹಾಗೂ ಕಲಿಕೆಯ ಅನುಭವಗಳನ್ನು ವಿನ್ಯಾಸಗೊಳಿಸಲಾಗಿತ್ತು. ಒಂದೇ ಒಂದು 'ಪಠ್ಯಪುಸ್ತಕ' ದ ಮೇಲೆ ಅವಲಂಬಿತರಾಗುವುದನ್ನು ತಡೆಯಲು ಶಿಕ್ಷಕ ಶಿಕ್ಷಕರು ಹಲವಾರು ತರಹದ ಸೂಕ್ತ ಸಂಪನ್ಮೂಲಗಳನ್ನು ಬಳಸುವಂತೆ ಪ್ರೋತ್ಸಾಹಿಸಲಾಯಿತು. ತರಗತಿಕೋಣೆಯಲ್ಲಿನ ಚಟುವಟಿಕೆಗಳು ಸ್ಪಂದನಶೀಲವಾಗಿ ಇರುವಂತೆ ಹಾಗೂ ಪ್ರಕ್ರಿಯೆಗಳನ್ನು ಮೌಲ್ಯಮಾಪನ ಮಾಡಲು ಅನುಕೂಲವಾಗುವಂತೆ ಪರಿಷ್ಕೃತ ಪಠ್ಯಕ್ರಮವು ಆಂತರಿಕ ಮೌಲ್ಯಮಾಪನಕ್ಕೆ 40% ಅಂಕಗಳನ್ನು ನೀಡಿತು. ಮೌಲ್ಯಮಾಪನಕ್ಕೆ ಅಗತ್ಯವಾದ ಹಲವಾರು ಸಾಧನಗಳನ್ನು, ಕಾರ್ಯತಂತ್ರಗಳನ್ನು ಹಾಗೂ ಕ್ರಿಯೆಗಳನ್ನು ಕೈಪಿಡಿಯಲ್ಲಿ ಸೂಚಿಸಲಾಗಿದೆ. ಆನಂತರದಲ್ಲಿ ಶಿಕ್ಷಕ ಶಿಕ್ಷಕರು ಸಂಸ್ಥೆಗಳಲ್ಲೆಲ್ಲೆಡೆ ಆಂತರಿಕ ಮೌಲ್ಯಮಾಪನದ ಗುಣಮಟ್ಟವನ್ನು ಕಾಯ್ದುಕೊಳ್ಳುವುದರ ಕುರಿತಾಗಿ ಇರುವ ತಮ್ಮ ಆತಂಕಗಳನ್ನು ವ್ಯಕ್ತಪಡಿಸಿದ ನಂತರ 'ಮೌಲ್ಯಮಾಪನದ ಮೇಲೆ ಸೂಚನ ಪುಸ್ತಿಕೆಯೊಂದನ್ನು ತಯಾರಿಸಲಾಯಿತು. 10 ದಿನದ ಪರಿಚಯಾತ್ಮಕ ಕಾರ್ಯಕ್ರಮವೊಂದನ್ನು ಸರಣಿ ಕ್ರಮದಲ್ಲಿ ಎರಡು ಹಂತದಲ್ಲಿ ಯೋಜಿಸಲಾಯಿತು. ಪ್ರತೀ DIET ಜಿಲ್ಲೆಯಿಂದ 5 ಶಿಕ್ಷಕ ಶಿಕ್ಷಕರನ್ನು ನಿಪುಣ ಸಂಪನ್ಮೂಲ ವ್ಯಕ್ತಿಗಳೆಂದು ಆಯ್ಕೆ ಮಾಡಿತು. ಹೀಗೆ ಆರಿಸಲ್ಪಟ್ಟ ಸುಮಾರು 150ಜನ ಪರಿಚಯಾತ್ಮಕ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಅವರು ರಾಜ್ಯದಾದ್ಯಂತ ತಮ್ಮ ತಮ್ಮ ಜಿಲ್ಲೆಗಳಲ್ಲಿ 4000 ಕ್ಕೂ ಹೆಚ್ಚು ಶಿಕ್ಷಕ ಶಿಕ್ಷಕರಿಗೆ ಇದನ್ನು ಪರಿಚಯಿಸಿದರು. ಶಿಕ್ಷಕ ಶಿಕ್ಷಕರು ದೇಶದಲ್ಲಿ ಶಿಕ್ಷಣದ ಕುರಿತಾಗಿ ಇರುವ ಪ್ರಸಕ್ತ ಚರ್ಚೆ/ಸಂವಾದ 'ಹಾಗೂ ನೀತಿಗಳನ್ನು ಹೆಚ್ಚು ತಿಳಿದಿರದ ಕಾರಣ ಐದು ದಿನಗಳ ಕಾರ್ಯಕ್ರಮದ ಮೊದಲ ಹಂತದಲ್ಲಿ NCF 2005, NCFTE 2009 ಮತ್ತು RtE 2009 ಕುರಿತಂತೆ ಸ್ಥೂಲ ತಿಳುವಳಿಕೆಯನ್ನು ನೀಡಲಾಯಿತು. ಎರಡನೇ ಹಂತದಲ್ಲಿ D.Ed ಕಾರ್ಯಕ್ರಮದ ತಾರ್ಕಿಕತೆ ಹಾಗೂ ನಿರೀಕ್ಷೆಗಳನ್ನು ಮತ್ತು ಪರಿಷ್ಕೃತ ಪಠ್ಯಕ್ರಮದಲ್ಲಿ ಹೇಳಲಾದಂತೆ ಪ್ರತೀ ಕೋರ್ಸ್‌ನ ತತ್ತ್ವಗಳನ್ನು ಸ್ಥೂಲವಾಗಿ ತಿಳಿಯಪಡಿಸಲಾಯಿತು. ಭಾಗವಹಿಸುವವರಲ್ಲಿ ಕೆಲವರು, ವಿಶೇಷವಾಗಿ DIET ಬೋಧಕವರ್ಗದವರು ಇನ್ನಿತರ ಕಾರ್ಯಗಳಿಂದಾಗಿ ಎರಡೂ ಹಂತಗಳಲ್ಲಿ ಭಾಗವಹಿಸಲು ಆಗದ ಕಾರಣ ನಿರಂತರತೆಯ ನಷ್ಟವು ವಿಧಾನದಲ್ಲಿಯೇ ಇರುವ ಪ್ರಸರಣ ನಷ್ಟವನ್ನು ಇನ್ನಷ್ಟು ಹೆಚ್ಚಿಸುತ್ತದೆ. ಅದಲ್ಲದೇ, ಭಾಗವಹಿಸಿದವರ ಸಂಖ್ಯೆ ಹೆಚ್ಚು ಇದ್ದ ಕಾರಣ, ಚರ್ಚೆ ಮತ್ತು ಸಂವಾದಗಳ ಮೂಲಕ ಆಳವಾಗಿ ತೊಡಗಿಕೊಳ್ಳಲು ಅವರಿಗೆ ತೊಡಕಾಯಿತು. ಇದನ್ನು ಕೆಲಮಟ್ಟಿಗೆ ಪರಿಹರಿಸಲು ಪಠ್ಯಕ್ರಮ ರಚನಾ ತಂಡ ಹಾಗೂ

ಶಿಕ್ಷಕ ಶಿಕ್ಷಕರ ನಡುವೆ ಪರಿಷ್ಕೃತ ಪಠ್ಯಕ್ರಮವು ಜಾರಿಯಾದ ಮೊದಲ ವರ್ಷ 2013–14ರಲ್ಲಿ ಕರ್ನಾಟಕದುದ್ದಗಲಕ್ಕೂ ಮೂರು ತಿಂಗಳಿಗೊಮ್ಮೆಯಂತೆ ದೂರಸಮಾವೇಶವನ್ನು (ಟೆಲಿಕಾನ್ಫರನ್ಸ್) ಹಮ್ಮಿಕೊಳ್ಳಲಾಗಿತ್ತು.

ನಾವಿನ್ನೂ ಹೇಳುವ ಅಥವಾ ಬೋಧಿಸುವ ರೀತಿಯಿಂದ ತೋರಿಸುವ ಹಾಗೂ ಮಾರ್ಗದರ್ಶನ ಮಾಡುವ ರೀತಿಗೆ ಬದಲಾಗಬೇಕಿದೆ. ಆದಾಗ್ಯೂ ಈ ರೀತಿಗಳು ಶಿಕ್ಷಕ ಶಿಕ್ಷಣಕ್ಕೆ ಸಾಕಾಗುವುದಿಲ್ಲ. ನಿಜವಾಗಿಯೂ ಪರ್ಯಾವಲೋಚಕ ಆಚರಣೆಯಾಗಲು ಹಾಗೂ ಒಳಗೊಳ್ಳುವಿಕೆಯನ್ನು ಖಚಿತಪಡಿಸಲು ಶಿಕ್ಷಕ ಶಿಕ್ಷಣವು ಪ್ರಶ್ನಿಸುವ, ಶೋಧಿಸುವ, ವಿಮರ್ಶಿಸುವ ಹಾಗೂ ತಾಂತ್ರಿಕತೆಗಳಿಂದಾಚೆ ಹೋಗುವಂತಹ ಕ್ಷೇತ್ರವಾಗಬೇಕು (ಲೌಗ್ರನ್. 2014). ಅನಿಶ್ಚಿತ ಹಾಗೂ ಕ್ಷಿಪ್ರ ಬದಲಾವಣೆಯ ಸನ್ನಿವೇಶದಲ್ಲಿ ಕೆಲಸ ಮಾಡಬಹುದಾದ ಕ್ರಿಯಾಶೀಲ ಶಿಕ್ಷಕರಾಗಿ ಹೊರಹೊಮ್ಮುವಂತಾಗಲು, ಶಿಕ್ಷಕ ಶಿಕ್ಷಕರು, ತಮ್ಮ ಶಿಕ್ಷಕ ವಿದ್ಯಾರ್ಥಿಗಳಲ್ಲಿ 'ಪರಿಣತಿ'ಯನ್ನು ಬೆಳೆಸುವ ಸಾಮರ್ಥ್ಯವನ್ನು ಹೊಂದಿರಬೇಕು ಹಾಗೂ ಅತ್ಯಂತ ಮುಖ್ಯವಾದುದೆಂದರೆ ಸಾಮಾಜಿಕವಾಗಿ ಒಳಗೊಳ್ಳುವಿಕೆಯ ಆಚರಣೆಗಳನ್ನು ಅನುಸರಿಸುವ ಮತ್ತು ವಿವಿಧ ಶಾಲೆಗಳ ಒಳಗೆ ಹಾಗೂ ನಡುವೆ ಹೆಚ್ಚುತ್ತಿರುವ ಸಾಧನೆಯ ಅಂತರವನ್ನು ಕಿರಿದುಗೊಳಿಸುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕು. ಹೀಗಾಗಲು ಶಿಕ್ಷಕ ಶಿಕ್ಷಕರು ಶಿಕ್ಷಣದಲ್ಲಿನ ಪ್ರಸಕ್ತ ಪರಿಕಲ್ಪನೆಗಳು ಹಾಗೂ ಆಚರಣೆಗಳೊಡನೆ ಹೆಚ್ಚು ಸೂಕ್ಷ್ಮವಾಗಿ ಹಾಗೂ ಆಳವಾದ ರೀತಿಯಲ್ಲಿ ತೊಡಗಿಕೊಳ್ಳುವ ಜವಾಬ್ದಾರಿಯನ್ನು ಹೊರಬೇಕು. ಪೂನಮ್ ಬಾತ್ರಾ ಅವರು ಶಿಕ್ಷಕರ ವಿಚಾರದಲ್ಲಿ ವ್ಯಕ್ತಪಡಿಸಿದಂತೆ (2014) ಅವರು ತಮ್ಮ ವೃತ್ತಿಪರ ಅಭಿವೃದ್ಧಿಯ ಕುರಿತಾಗಿ ದೂರದೃಷ್ಟಿ ಹಾಗೂ ಒಳನೋಟಗಳನ್ನು ಬೆಳೆಸಿಕೊಳ್ಳಬೇಕು. ಹಾಗೂ 'ಸುಧಾರಣೆಗಳಿಗೆ ವಸ್ತು'ವಾಗುವ ಬದಲು ಸುಧಾರಣೆಗಳಿಗೆ ಚಾಲಕ ಶಕ್ತಿಯಾಗಬೇಕು.

ಅದೇ ವೇಳೆಗೆ ವಿವಿಧ ಹಿನ್ನೆಲೆಗಳಿಂದ ಬರುವ ಆಸಕ್ತ ಜನರು ಶಿಕ್ಷಕ ವೃತ್ತಿಯನ್ನು ಉದ್ಯೋಗವನ್ನಾಗಿ ಆಯ್ದುಕೊಳ್ಳುವಂತೆ ಪ್ರೋತ್ಸಾಹಿಸಲು ಹಾಗೂ ಅತ್ಯಗತ್ಯವಾದ ಸ್ಪಂದನಶೀಲತೆಯನ್ನು ಪೋಷಿಸಲು NCFTE ಯಲ್ಲಿ ಸೂಚಿಸಿದಂತೆ ಪ್ರಾವೇಶಿಕ ಮಟ್ಟದ ನಿಯಮಗಳನ್ನು ಅಡಿಮಟ್ಟದಲ್ಲಿ ವಿಶಾಲಗೊಳಿಸುವ ನಿಟ್ಟಿನಲ್ಲಿ ನಿಯಂತ್ರಣ ವ್ಯವಸ್ಥೆಯು ಊಹಾತ್ಮಕವೂ ದೂರದೃಷ್ಟಿಯುಳ್ಳದ್ದೂ ಆಗಬೇಕು. M.Edನ ಪರಿಷ್ಕೃತ ಪಠ್ಯಕ್ರಮವನ್ನು (NCTE 2014) ಅರ್ಥಪೂರ್ಣವಾಗಿ ಜಾರಿಗೊಳಿಸಲು ಶಿಕ್ಷಣ ಸಂಬಂಧೀ ಶಿಕ್ಷಣವನ್ನು ನೀಡುತ್ತಿರುವ ವಿಶ್ವವಿದ್ಯಾನಿಲಯದ ಪ್ರಸಕ್ತ ವಿಭಾಗಗಳು ಹಾಗೂ ಶಿಕ್ಷಣ ವಿದ್ಯಾಲಯಗಳು ವಿವಿಧ ರೀತಿಯ ಸಂಪನ್ಮೂಲಗಳನ್ನು ಹೊಂದಬೇಕಾದ ಅಗತ್ಯವಿದೆ ಹಾಗೂ ಬೋಧಕವರ್ಗಕ್ಕೆ ಆಮೂಲಾಗ್ರ ಪರಿಚಯವನ್ನು ನೀಡಬೇಕಾಗಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಶಿಕ್ಷಕ ಶಿಕ್ಷಕರ ವೃತ್ತಿಪರ ಅಭಿವೃದ್ಧಿಗೆ ಅಗತ್ಯವಾದ ಸದೃಢ ಸಂರಚನೆ ಹಾಗೂ ವಿನ್ಯಾಸಗಳನ್ನು ವ್ಯವಸ್ಥಿತವಾಗಿ ಇಡಬೇಕಾಗುತ್ತದೆ.

ಟಿಪ್ಪಣಿಗಳು:

1. DSERT ಯಲ್ಲಿನ ಅಧಿಕಾರಿಗಳು ಹಾಗೂ ಪಠ್ಯಕ್ರಮವನ್ನು ರಚಿಸಿದ ಮತ್ತು ಸಂಬಂಧಪಟ್ಟ ಸಾಮಗ್ರಿಗಳನ್ನು ತಯಾರಿಸಿದ ತಂಡಕ್ಕೆ, ವಿಶೇಷವಾಗಿ ಪಠ್ಯಕ್ರಮ ಅನುಷ್ಠಾನ ತಂಡದ ನೇತೃತ್ವ ವಹಿಸಿದ, RIE ಮೈಸೂರಿನ ಪ್ರೊಫೆಸರ್ ಸಿ.ಜಿ.ವೆಂಕಟೇಶಮೂರ್ತಿ ಅವರಿಗೆ ನನ್ನ ಕೃತಜ್ಞತೆಗಳು.

2. ಕರ್ನಾಟಕ ಜ್ಞಾನ ಆಯೋಗವುಅಧ್ಯಯನವನ್ನು ಕೈಗೊಳ್ಳುವ ಕಾರ್ಯವನ್ನು 2010ರಲ್ಲಿ RVEC ವಹಿಸಿತು.
ಕರ್ನಾಟಕದುದ್ದಗಲಕ್ಕೂ ಇದ್ದ 108 ಶಿಕ್ಷಕ ಶಿಕ್ಷಣ ಸಂಸ್ಥೆಗಳನ್ನು – TEI (ಆ ಸಮಯದಲ್ಲಿದ್ದ ವಿದ್ಯಾಲಯಗಳಲ್ಲಿ 10 % ನ್ನು ಅದು ಒಳಗೊಂಡಿತ್ತು) ಅಧ್ಯಯನ ಮಾಡಲಾಗಿತ್ತು.

3. ವೃತ್ತಿಯಲ್ಲಿ ತೊಡಗಿರುವವರ ಹಾಗೂ ಕಾರ್ಯಕ್ಷೇತ್ರ ತಜ್ಞರ ಸಹ ಆಯ್ಕೆಯ ಜೊತೆಗೆ ನಿಲುವು ಪ್ರಬಂಧಗಳನ್ನು ಬರೆಯುವುದರಲ್ಲಿ, ಕೋರ್ಸ್ ಪಠ್ಯಕ್ರಮಗಳನ್ನು ರಚಿಸುವುದರಲ್ಲಿ, ಶಿಕ್ಷಕ ಶಿಕ್ಷಕರ ಕೈಪಿಡಿಗಳನ್ನು ಮತ್ತು ಶಿಕ್ಷಕ ವಿದ್ಯಾರ್ಥಿಗಳಿಗಾಗಿ ಪಠ್ಯದ ಮೂಲಗಳನ್ನು (ಸೌರ್ಸ್‌ಬುಕ್) ಹಾಗೂ KSEEB ಯು ನಡೆಸಿದ ಅಂತಿಮ ಪರೀಕ್ಷೆಗೆ ಮೊದಲ ಪ್ರಶ್ನೆ ಪತ್ರಿಕೆಯ ಗುಂಪನ್ನು ತಯಾರಿಸುವ ಸಂಪೂರ್ಣ ಪ್ರಕ್ರಿಯೆಯಲ್ಲಿ ಬಹುಪಾಲು ಕೋರ್ಸ್‌ಗಳ ಸಂಚಾಲಕರುಗಳನ್ನು ತೊಡಗಿಸಿಕೊಳ್ಳಲಾಗಿತ್ತು.

ಪರಾಮರ್ಶನ:


- ಪೂನಮ್ ಬಾತ್ರಾ. 2014. ಪ್ರೊಬ್ಲಮಟೈಸಿಂಗ್ ಟೀಚರ್ ಎಜುಕೇಷನ್ ಪ್ರಾಕ್ಟೀಸ್ ಇನ್ ಇಂಡಿಯಾ: ಡೆವಲಪಿಂಗ್ ಎ ರಿಸರ್ಚ್ ಅಜೆಂಡಾ. ಎಜುಕೇಷನ್ ಎಸ್ ಚೇಂಜ್. 18 (1): ಪಿಪಿ 55–58
- ಡಿಪಾರ್ಟ್‌ಮೆಂಟ್ ಆಫ್ ಸ್ಟೇಟ್ ಎಜುಕೇಷನ್ ರಿಸರ್ಚ್ ಎಂಡ್ ಟ್ರೇಯ್ನಿಂಗ್ (ಆಖಇಖಖ) 2012. ಕರ್ನಾಟಕ ಎಲಿಮೆಂಟರಿ ಟೀಚರ್ ಎಜುಕೇಷನ್ ಕರಿಕ್ಯುಲಮ್. ಬ್ಯಾಂಗಲೋರ್: –DSERT
- ಡಿಪಾರ್ಟ್‌ಮೆಂಟ್ ಆಫ್ ಸ್ಟೇಟ್ ಎಜುಕೇಷನ್ ರಿಸರ್ಚ್ ಎಂಡ್ ಟ್ರೇಯ್ನಿಂಗ್ (ಆಖಇಖಖ) 2013. ಟೀಚರ್ ಎಜುಕೇಟರ್ಸ್ ಹ್ಯಾಂಡ್‌ಬುಕ್. ಬ್ಯಾಂಗಲೋರ್:–DSERT
- ಲೌಗ್ರನ್. ಜೆ. 2014. ಪ್ರೊಫೆಷನಲೀ ಡೆವಲಪಿಂಗ್ ಎಸ್ ಅ ಟೀಚರ್ ಎಜುಕೇಟರ್. ಜರ್ನಲ್ ಆಫ್ ಟೀಚರ್ ಎಜುಕೇಷನ್ 65 (4) ಪಿಪಿ. 271–283.
- ನ್ಯಾಷನಲ್ ಕೌನ್ಸಿಲ್ ಫಾರ್ ಎಜುಕೇಷನಲ್ ರಿಸರ್ಚ್ ಎಂಡ್ ಟ್ರೇಯ್ನಿಂಗ್ (ಓಅಇಖಖ) 2005. ನ್ಯಾಷನಲ್ ಕರಿಕ್ಯುಲಮ್ ಫ್ರೇಮ್‌ವರ್ಕ್. ನ್ಯೂ ಡೆಲ್ಲಿ: – NCERT
- ನ್ಯಾಷನಲ್ ಕೌನ್ಸಿಲ್ ಫಾರ್ ಟೀಚರ್ ಎಜುಕೇಷನ್ (ಓಅಖಇ), 2009. ನ್ಯಾಷನಲ್ ಕರಿಕ್ಯುಲಮ್ ಫ್ರೇಮ್‌ವರ್ಕ್ ಫಾರ್ ಟೀಚರ್ ಎಜುಕೇಷನ್. ನ್ಯೂ ಡೆಲ್ಲಿ : –NCTE
- ಮೈಥಿಲಿ ರಾಮಚಂದ್ 2011. ಪ್ರೀಸರ್ವೀಸ್ ಎಲಿಮೆಂಟರಿ ಟೀಚರ್ ಎಜುಕೇಷನ್ ಇನ್ ಕರ್ನಾಟಕ: ಅ ಸ್ಟೇಟಸ್ ಸ್ಟಡಿ. ಬ್ಯಾಂಗಲೋರ್ ; ಕರ್ನಾಟಕ ಜ್ಞಾನ ಸಮಿತಿ
- ಸೊಕೆಟ್, ಹ್ಯೂ 2008. ದ ಮೊರಲ್ ಎಂಡ್ ಎಪಿಸ್ಟಮಿಕ್ ಪರ್ಪಸಸ್ ಆಫ್ ಟೀಚರ್ ಎಜುಕೇಷನ್. ಇನ್ ಕೊಕ್ರನ್–ಸ್ಮಿತ್, ಫೇಮನ್– ನೆಮ್ಸರ್ ಎಂಡ್ ಮ್ಯಕ್ ಇಂಟೈರ್ (ಇಜ). ಹ್ಯಾಂಡ್‌ಬುಕ್ ಆಫ್ ರೀಸರ್ಚ್ ಆನ್ ಟೀಚರ್ ಎಜುಕೇಷನ್. ನ್ಯೂಯಾರ್ಕ್: ರಟ್ಲೆಜ್



ಪ್ರಸ್ತುತ, ಮೈಥಿಲಿ ಅವರು ಬೆಂಗಳೂರಿನ ಆರ್‌ವಿ ಎಜುಕೇಷನಲ್ ಕನ್ಸಾರ್ಟಿಯಮ್‌ನಲ್ಲಿ ನಿರ್ದೇಶಕರಾಗಿದ್ದಾರೆ ಹಾಗೂ ಮುಂಬೈನ TISS ನಲ್ಲಿ ಅಡ್ಜಂಕ್ಟ್ ಅಸೋಸಿಯೇಟ್ ಪ್ರೊಫೆಸರ್ ಆಗಿದ್ದಾರೆ. RVEC ಯ ಪ್ರಮುಖ ಲಕ್ಷ್ಯವು ಪ್ರಾಥಮಿಕ ಶಿಕ್ಷಕ ಶಿಕ್ಷಣದ ಕ್ಷೇತ್ರದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಯ ಮೇಲಿದೆ. ಮೈಥಿಲಿ ಅವರು ಸದ್ಯಕ್ಕೆ ಪ್ರಸ್ತುತ ಕಾರ್ಯಯೋಜನೆಗಳನ್ನು RVECಯಲ್ಲಿ ಮುನ್ನಡೆಸುವ ಕಾರ್ಯದಲ್ಲಿ ಹಾಗೂ ಶಿಕ್ಷಕ ಶಿಕ್ಷಕರಿಗೆ TISSನ ಸಹಯೋಗದೊಂದಿಗೆ ಸರ್ಟಿಫಿಕೇಟ್ ಕೋರ್ಸ್‌ಗಳನ್ನು ಆರಂಭಿಸುವುದರಲ್ಲಿ ತೊಡಗಿಕೊಂಡಿದ್ದಾರೆ. ಅವರ ಆಸಕ್ತಿಗಳು ಒಳಗೊಳ್ಳುವಿಕೆಯ ಶಿಕ್ಷಣ ಹಾಗೂ ಶಿಕ್ಷಣದ ತತ್ತ್ವಗಳನ್ನು ಒಳಗೊಂಡಿವೆ. ಅವರನ್ನು rvecbangalore@gmail.com ಮೂಲಕ ಸಂಪರ್ಕಿಸಬಹುದು.